# ಶಿಕ್ಷಕರ ಶಿಕ್ಷಣ ಕುರಿತಾದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (ಎನ್‌ಸಿಎಫ್‌ಟಿಇ)

## 2009ರ ಪ್ರಕಾರ 'ಶಿಕ್ಷಕ'ರ ಕುರಿತಾದ ನೋಟ

ಎನ್‌ಸಿಎಫ್‌ಟಿಇಯು ಶಿಕ್ಷಕರ ಕುರಿತಾದ ನೋಟವನ್ನು ಈ ಕೆಳಗಿನಂತೆ ಪ್ರಸ್ತುತಪಡಿಸಿದೆ.

- ಶಿಕ್ಷಕರು ಪರ್ಯಾಲೋಚಿಸುವವರಾಗಿದ್ದು ತಮ್ಮ ನಂಬಿಕೆ, ಭಾವನೆ, ಆಶೋತ್ತರ ಹಾಗೂ ಕಲ್ಪನೆಗಳನ್ನು ಅರಿತವರಾಗಿರುತ್ತಾರೆ. ಈ ಕಲ್ಪನೆಗಳು ಆಚರಣೆಯನ್ನು ಹೇಗೆ ಪ್ರಭಾವಿಸುತ್ತವೆ ಎಂಬುದನ್ನು ತಿಳಿದವರಾಗಿರುತ್ತಾರೆ. ಆ ಕಲ್ಪನೆ ಮತ್ತು ನಂಬಿಕೆಗಳಲ್ಲಾದ ಪಲ್ಲಟಗಳ ಅರಿವುಳ್ಳವರಾಗಿರುತ್ತಾರೆ. ಪಠ್ಯಕ್ರಮ, ಪಠ್ಯಪುಸ್ತಕಗಳು, ಪಾತ್ರ ಇತ್ಯಾದಿ ಹಲವಾರು ವಿಷಯಗಳನ್ನು ಕುರಿತಾದ ತಮ್ಮ ನಂಬಿಕೆ ಹಾಗೂ ಚಿಂತನೆಗಳನ್ನು ವಿಮರ್ಶಾತ್ಮಕವಾಗಿ ಪರಿಶೋಧಿಸಲು ಹಾಗೂ ವಿಶ್ಲೇಷಿಸಲು ಬೇಕಾದ ಮುಕ್ತ ಮನಸ್ಸನ್ನು ಹೊಂದಿರುತ್ತಾರೆ.
- ಬೋಧನೆ – ಕಲಿಕೆಯ ಸನ್ನಿವೇಶಗಳಲ್ಲಿ ಉತ್ತೇಜನ, ಬೆಂಬಲ ನೀಡುವವರು ಹಾಗೂ ಮಾನವೀಯ ಅಂತಃಕರಣವನ್ನುಳ್ಳ ಸುಗಮಗಾರರಾಗಿರುತ್ತಾರೆ. ಕಲಿಯುವವರಿಗೆ ತಮ್ಮ ಪ್ರತಿಭೆಯನ್ನು ಅನ್ವೇಷಿಸಲು, ತಮ್ಮ ದೈಹಿಕ ಹಾಗೂ ಬೌದ್ಧಿಕ ಸಾಮರ್ಥ್ಯವನ್ನು ಸಂಪೂರ್ಣವಾಗಿ ಅರಿಯಲು ಸಾಧ್ಯವಾಗುವಂತೆ ಮಾಡುತ್ತಾರೆ.
- ವಿದ್ಯಾರ್ಥಿಗಳನ್ನು ಕುರಿತು ಕಾಳಜಿ ಹೊಂದಿರುತ್ತಾರೆ ಹಾಗೂ ಅವರೊಂದಿಗೆ ಇರಲು ಇಷ್ಟಪಡುತ್ತಾರೆ. ಅವರನ್ನು ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಸಂದರ್ಭಗಳೊಳಗೆ ಅರ್ಥಮಾಡಿಕೊಳ್ಳುತ್ತಾರೆ.
- ಕಲಿಕೆಯನ್ನು ವೈಯಕ್ತಿಕ ಅನುಭವದಿಂದ ಅರ್ಥವನ್ನು ಶೋಧಿಸುವ ಕ್ರಿಯೆಯೆಂದು ನೋಡುತ್ತಾರೆ. ಕಲಿಕೆಯು ಉಂಟಾಗುವ ರೀತಿಯನ್ನು ಅರ್ಥಮಾಡಿಕೊಳ್ಳುತ್ತಾರೆ. ಕಲಿಕೆಗೆ ಅನುಕೂಲಕರವಾದ ಸ್ಥಿತಿಗತಿಗಳ

ನಿರ್ಮಾಣವನ್ನು ಸಾಧ್ಯವಾಗಿಸುತ್ತಾರೆ. ಕಲಿಯುವವರಲ್ಲಿ ಕಲಿಕೆಗೆ ಸಂಬಂಧಿಸಿದಂತೆ ಇರುವ ಬಗೆ, ಗತಿ ಹಾಗೂ ಶೈಲಿಗಳಲ್ಲಿನ ವ್ಯತ್ಯಾಸಗಳನ್ನು ಗುರುತಿಸಬಲ್ಲವರಾಗಿರುತ್ತಾರೆ.

- ಜ್ಞಾನ ಸೃಷ್ಟಿಯನ್ನು ಪರ್ಯಾಲೋಚಕ ಕಲಿಕೆಯ ನಿರಂತರ ವಿಕಸನದ ಪ್ರಕ್ರಿಯೆಯೆಂದು ನೋಡುತ್ತಾರೆ. ಅದನ್ನು ಪಠ್ಯಪುಸ್ತಕಗಳಲ್ಲಿ ಹುದುಗಿರುವ ಬಾಹ್ಯ ಮೂಲದ ವಾಸ್ತವವಾಗಿ ಅಲ್ಲ, ಆದರೆ ಬೋಧನೆ–ಕಲಿಕೆ ಮತ್ತು ವೈಯಕ್ತಿಕ ಅನುಭವಗಳ ಕೊಡುಕೊಳ್ಳುವಿಕೆಯ ಸಂದರ್ಭದಲ್ಲಿ ನಿರ್ಮಿತವಾದದ್ದೆಂದು ಭಾವಿಸುತ್ತಾರೆ.
- ಸಮಾಜದ ಕುರಿತು ಜವಾಬ್ದಾರಿಯನ್ನು ಹೊಂದಿರುತ್ತಾರೆ ಹಾಗೂ ಸಾಮಾಜಿಕ ಪುನರ್‌ರಚನೆಯನ್ನು ತರುವ ನಿಟ್ಟಿನಲ್ಲಿ ಉತ್ಸಾಹದಿಂದ ಕೆಲಸ ಮಾಡುತ್ತಾರೆ.
- ಪರಿಸರ ಸಂರಕ್ಷಣೆ, ತನ್ನೊಳಗೆ ತಾನು ಮತ್ತು ನೈಸರ್ಗಿಕ, ಸಾಮಾಜಿಕ ಪರಿಸರದೊಡನೆ ಸೌಹಾರ್ದತೆಯಿಂದ ಬದುಕುವುದಕ್ಕೆ ಒತ್ತು ನೀಡುತ್ತಾರೆ. ಶಾಂತಿ, ಪ್ರಜಾತಾಂತ್ರಿಕ ಜೀವನ ಮಾರ್ಗಗಳು, ಸಂವಿಧಾನದಲ್ಲಿ ಉಲ್ಲೇಖಿಸಿರುವಂತೆ ಸಮಾನತೆ, ನ್ಯಾಯ, ಸ್ವಾತಂತ್ರ್ಯ, ಭ್ರಾತೃತ್ವ ಹಾಗೂ ಧರ್ಮನಿರಪೇಕ್ಷತೆಯ ಮೌಲ್ಯಗಳನ್ನು ಪ್ರೋತ್ಸಾಹಿಸುತ್ತಾರೆ. ಬೆಲೆಕೊಡುತ್ತಾರೆ.
- ತಮ್ಮ ವಿಷಯವನ್ನು ಆಳವಾಗಿ ಪರಿಶೋಧಿಸುವ ಉತ್ಕಟತೆಯನ್ನು ಹೊಂದಿರುವ ವೃತ್ತಿಪರರಾಗಿರುತ್ತಾರೆ. ಪರಿಕಲ್ಪನೆಗಳೊಳಗಿನ ಹಾಗೂ ಎಲ್ಲ ವಿಷಯಗಳ ನಡುವಿನ ಪರಸ್ಪರ ಸಂಬಂಧಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಅವುಗಳನ್ನು ತರಗತಿಕೋಣೆಗಳಲ್ಲಿ ಕಲಿಯುವವರ ತನಕ ಕೊಂಡೊಯ್ಯಲು ಹೊಸ ವಿಧಾನಗಳನ್ನು, ಸಂಪನ್ಮೂಲಗಳನ್ನು ಕಂಡುಹಿಡಿಯುತ್ತಾರೆ.

■



**4ನೇ ಜನವರಿ 2013 –** ಡಾ. ಆರ್ಥರ್ ಐಸನ್‌ಕ್ರಾಫ್ಟ್ ಬೋಸ್ಟನ್‌ನ ಯೂನಿವರ್ಸಿಟಿ ಆಫ್ ಮ್ಯಾಸಚುಸೆಟ್ಸ್‌ನ ಸೆಂಟರ್ ಆಫ್ ಸೈನ್ಸ್ ಅಂಡ್ ಮ್ಯಾಥಮ್ಯಾಟಿಕ್ಸ್ ಇನ್ ಕಾಂಟೆಕ್ಸ್ಟ್(COSMIC)ನ ನಿರ್ದೇಶಕರು ಮತ್ತು ವಿಜ್ಞಾನ ಶಿಕ್ಷಣದ ಗೌರವ ಪ್ರಾಧ್ಯಾಪಕರು. ಅವರು ಮಂಡ್ಯದ ಸರ್ಕಾರಿ ಶಾಲೆಯೊಂದರಲ್ಲಿ ಆರನೇ ತರಗತಿ ಮಕ್ಕಳನ್ನು ವಿಜ್ಞಾನ ಪಾಠದಲ್ಲಿ ತೊಡಗಿಸಿದ ಕ್ಷಣ. ಈ ಹಿಂದೆ ಸುದೀರ್ಘಕಾಲ ಪ್ರೌಢಶಾಲೆಯ ಶಿಕ್ಷಕರಾಗಿದ್ದ ಇವರು ನಮ್ಮ ವಿಶ್ವವಿದ್ಯಾಲಯಗಳ ಬೋಧಕವರ್ಗಕ್ಕೆ ಮಾದರಿಯಾಗಿದ್ದಾರೆ.